# ಇಸ್ಲಾಮ್ ಹಬ್ಬಿದ್ದು ಖಡ್ಗದಿಂದ?

17






مدرسة الصفة الإسلامية

**MADRASATU SUFFAH AL ISLAMIYYA**

SKYWAY COMPLEX, 6TH BLOCK, KRISHNAPURA,
SURATKAL, MANGALORE - 575 014
PH: 0824-2271449 MOB: 8722695551

ಬಲಪ್ರಯೋಗ ಇಲ್ಲದಿರುತ್ತಿದ್ದರೆ ಇಸ್ಲಾಂ ಧರ್ಮಕ್ಕೆ ಜಾಗತಿಕವಾಗಿ ಕೋಟ್ಯಂತರ ಅನುಯಾಯಿಗಳು ಇರುತ್ತಿರಲಿಲ್ಲ —ಇದು ಸಾಮಾನ್ಯವಾಗಿ ಮುಸ್ಲಿಮೇತರ-ರಲ್ಲಿರುವ ಒಂದು ಸಂಶಯ. ವಾಸ್ತವದಲ್ಲಿ ಇದೊಂದು ತಪ್ಪುಕಲ್ಪನೆ. ಇಸ್ಲಾಂ ಹಬ್ಬಿದ್ದು ಖಡ್ಗದಿಂದಲ್ಲ. ಬದಲಾಗಿ ಇಸ್ಲಾಮಿನ ಸತ್ಯಸಂಧ, ವೈಚಾರಿಕ ಮತ್ತು ತಾರ್ಕಿಕ ಬೋ-ಧನೆಗಳು ಇಸ್ಲಾಂ ಧರ್ಮವನ್ನು ಜಗತ್ತಿನಾದ್ಯಂತ ಕ್ಷಿಪ್ರವಾ-ಗಿ ಹಬ್ಬಿಸಿತೆಂದು ಈ ಕೆಳಗೆ ಸೂಚಿಸಿದ ಸಂಗತಿಗಳಿಂದ ತಿಳಿಯಬಹುದು.

1. ಇಸ್ಲಾಮ್ ಎಂದರೆ ಶಾಂತಿ:

ಇಸ್ಲಾಮ್ ಎಂಬ ಹೆಸರು ‘ಸಲಾಮ್’ ಎಂಬ ಪದದಿಂದ ಬಂದಿದೆ. ಇದರ ಅರ್ಥ ಶಾಂತಿ. ಒಬ್ಬ ತನ್ನ ಇಚ್ಛೆಯನ್ನು ಅಲ್ಲಾಹನಿಗೆ ಸಮರ್ಪಿಸಿದನು ಎಂಬ ಅರ್ಥವೂ ಇದ-ಕ್ಕಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ, ಒಬ್ಬ ತನ್ನ ಇಚ್ಛೆ-ಯನ್ನು ಸೃಷ್ಟಿಕರ್ತನಾದ ಅಲ್ಲಾಹನಿಗೆ ಸಮರ್ಪಿಸುವ

ಮೂಲಕ ಪಡೆಯುವ ಶಾಂತಿಯಾಗಿದೆ ಇಸ್ಲಾಮ್.

2. ಶಾಂತಿಯನ್ನು ಸ್ಥಾಪಿಸಲು ಕೆಲವೊಮ್ಮೆ ಬಲಪ್ರಯೋಗ ಅನಿವಾರ್ಯ:

ಈ ಜಗತ್ತಿನಲ್ಲಿ ಎಲ್ಲರೂ ಶಾಂತಿ ಮತ್ತು ಸೌಹಾರ್ದತೆಯ ಪರವಾಗಿಲ್ಲ. ಅಂದರೆ ತಮ್ಮ ಸ್ಥಾಪಿತ ಹಿತಾಸಕ್ತಿಗಳಿಗಾಗಿ ಶಾಂತಿ ಮತ್ತು ಸೌಹಾರ್ದತೆಯನ್ನು ಕದಡುವ ಜನರೂ ಈ ಜಗತ್ತಿನಲ್ಲಿದ್ದಾರೆ. ಅಪರಾಧಿಗಳ ಮತ್ತು ಸಮಾಜ ವಿರೋಧಿ ಶಕ್ತಿಗಳ ವಿರುದ್ಧ ಬಲಪ್ರಯೋಗ ಮಾಡಿ ದೇಶದಲ್ಲಿ ಶಾಂತಿ ಕಾಪಾಡುವುದಕ್ಕಾಗಿ ನಾವು ಪೊಲೀಸ್ ಬಲವನ್ನು ಹೊಂದಿದ್ದೇವೆ. ಇಸ್ಲಾಮ್ ಶಾಂತಿಯನ್ನು ಉತ್ತೇಜಿಸುತ್ತದೆ. ಅದೇ ಸಮಯ, ಎಲ್ಲಿ ದಬ್ಬಾಳಿಕೆಯಿದೆಯೋ ಅಲ್ಲಿ ಹೋರಾಟ ನಡೆಸುವುದನ್ನು ಇಸ್ಲಾಮ್ ಪ್ರೋತ್ಸಾಹಿಸುತ್ತದೆ. ದಬ್ಬಾಳಿಕೆಯ ವಿರುದ್ಧ ಹೋರಾಡುವಾಗ ಕೆಲವೊಮ್ಮೆ ಬಲಪ್ರಯೋಗ ಅನಿವಾರ್ಯವಾಗುತ್ತದೆ. ಆದರೆ ಇಸ್ಲಾಮಿನಲ್ಲಿ ಬಲಪ್ರಯೋಗ ನಡೆ-

ಸಬೇಕಾದುದು ಕೇವಲ ಶಾಂತಿಯನ್ನು ಸ್ಥಾಪಿಸುವುದಕ್ಕೆ ಮಾತ್ರವಾಗಿದೆ.

3. ಇತಿಹಾಸ ತಜ್ಞ De Lacy O'Leary ರವರ ಅಭಿಪ್ರಾಯ:

ಇಸ್ಲಾಮ್ ಹಬ್ಬಿದ್ದು ಖಡ್ಗದಿಂದ ಎಂಬ ತಪ್ಪುಕಲ್ಪನೆಗೆ ಅತ್ಯಂತ ಸ್ಪಷ್ಟ ಉತ್ತರವನ್ನು De Lacy O'Leary ತಮ್ಮ Islam at the cross road ಎಂಬ ಗ್ರಂಥದಲ್ಲಿ (ಪುಟ 8) ನೀಡಿದ್ದಾರೆ.

History makes it clear however, that the legend of fanatical Muslims sweeping through the world and forcing Islam at the point of the sword upon conquered races is one of the most fantastically absurd myth that historians have ever

repeated.

“ಮತಾಂಧ ಮುಸ್ಲಿಮರು ಜಗತ್ತಿನಾದ್ಯಂತ ಆಕ್ರಮಣ-ಗೈದರು ಮತ್ತು ಖಡ್ಗದ ಮೊನೆಯಿಂದ ಬಲಪ್ರಯೋಗ ಮಾಡಿ ಜನಾಂಗಗಳನ್ನು ಜಯಿಸಿದರು ಎಂಬ ದಂತ-ಕಥೆಯು ಇತಿಹಾಸಕಾರರು ಸದಾ ಪುನರಾವರ್ತಿಸುವ ವಿಚಿತ್ರ ಹಾಸ್ಯಾಸ್ಪದ ಕಟ್ಟುಕಥೆಯೆಂದು ಇತಿಹಾಸವು ಸ್ಪಷ್ಟಪಡಿಸಿದೆ.”

4. ಮುಸ್ಲಿಮರು ಸ್ಪೈನ್ ದೇಶವನ್ನು 800 ವರ್ಷ ಆಳಿದರು:

ಮುಸ್ಲಿಮರು ಸ್ಪೈನ್ ದೇಶವನ್ನು 800 ವರ್ಷ ಆಳಿದರು. ಸ್ಪೈನ್‌ನಲ್ಲಿದ್ದ ಮುಸ್ಲಿಮರು ಜನರನ್ನು ಮತಾಂತರಗೊಳಿಸಲು ಎಂದೂ ಖಡ್ಗವನ್ನು ಬಳಸಿರಲಿಲ್ಲ. ನಂತರ ಕ್ರೈಸ್ತ ಶಿಲುಬೆಯೋಧರು (Christian Crusaders) ಮುಸ್ಲಿಮರನ್ನು ಅಲ್ಲಿ ನಿರ್ನಾಮ ಮಾಡಿದರು.

ಅಝಾನ್ (ನಮಾಝ್‌ಗಾಗಿ ಆಹ್ವಾನಿಸುವ ಕರೆ)ಯನ್ನು ಬಹಿರಂಗವಾಗಿ ನೀಡಲು ಅಲ್ಲಿ ಒಬ್ಬನೇ ಒಬ್ಬ ಮುಸ-ಲ್ಮಾನನೂ ಇರಲಿಲ್ಲ.

5. 14 ಮಿಲಿಯ ಅರಬ್ಬರು ಅನುವಂಶಿಕ ಕ್ರೈಸ್ತರು:

1400 ವರ್ಷಗಳ ಕಾಲ ಮುಸಲ್ಮಾನರು ಅರೇಬಿಯಾದ ದೊರೆಗಳಾಗಿದ್ದರು. ಕೆಲವು ವರ್ಷಗಳ ಕಾಲ ಬ್ರಿಟಿಷ-ರು ಆಳಿದರು ಮತ್ತು ಕೆಲವು ವರ್ಷಗಳ ಕಾಲ ಫ್ರೆಂಚರು ಆಳಿದರು. ಎಲ್ಲರಿಗಿಂತಲೂ ಹೆಚ್ಚಾಗಿ, ಮುಸ್ಲಿಮರು 1400 ವರ್ಷಗಳ ಕಾಲ ಆಳಿದರು. ಆದರೆ ಇಂದೂ ಕೂಡ ಅಲ್ಲಿ 14 ಮಿಲಿಯ ಅನುವಂಶಿಕ ಕ್ರೈಸ್ತರಿದ್ದಾರೆ. ಅಂದರೆ ತಲೆ-ಮಾರುಗಳಿಂದ ನೆಲೆಸಿರುವ ಕ್ರೈಸ್ತರು. ಒಂದು ವೇಳೆ ಮುಸಲ್ಮಾನರು ಖಡ್ಗವನ್ನು ಬಳಸುತ್ತಿದ್ದರೆ ಅಲ್ಲಿ ಒಬ್ಬನೇ ಒಬ್ಬ ಅರಬ್ ಕ್ರೈಸ್ತನೂ ಇರುತ್ತಿರಲಿಲ್ಲ.

6. ಭಾರತದಲ್ಲಿ 80 ಶೇಕಡಕ್ಕಿಂತಲೂ ಹೆಚ್ಚು ಮುಸ್ಲಿ-

ಮೇತರರಿದ್ದಾರೆ:

ಮುಸ್ಲಿಮರು ಭಾರತವನ್ನು ಸರಾಸರಿ 1000 ವರ್ಷಗಳ ಕಾಲ ಆಳಿದರು. ಅವರು ಬಯಸಿದ್ದರೆ ಭಾರತದಲ್ಲಿರುವ ಪ್ರತಿಯೊಬ್ಬ ಮುಸ್ಲಿಮೇತರನನ್ನೂ ಇಸ್ಲಾಮಿಗೆ ಮತಾಂತರ ಮಾಡುವ ಅಧಿಕಾರ ಅವರಲ್ಲಿತ್ತು. ಇಸ್ಲಾಮ್ ಖಡ್ಗದಿಂದ ಹಬ್ಬಿದ್ದಲ್ಲ ಎನ್ನುವುದಕ್ಕೆ ಇಂದು ಭಾರತದಲ್ಲಿ ಜೀವಂತವಿರುವ ಪ್ರತಿಯೊಬ್ಬ ಮುಸ್ಲಿಮೇತರನೂ ಸಾಕ್ಷಿಯಾಗಿದ್ದಾನೆ.

7. ಇಂಡೋನೇಶ್ಯಾ ಮತ್ತು ಮಲೇಶ್ಯಾ:

ಜಗತ್ತಿನಲ್ಲಿ ಅತಿಹೆಚ್ಚು ಮುಸ್ಲಿಮರು ಇರುವುದು ಇಂಡೋನೇಶ್ಯಾದಲ್ಲಿ. ಮಲೇಶ್ಯಾದಲ್ಲಿರುವ ಬಹುಸಂಖ್ಯಾತರು ಮುಸಲ್ಮಾನರು. ನಾನು ಕೇಳುತ್ತೇನೆ: ಯಾವ ಮುಸ್ಲಿಮ್ ಸೈನ್ಯವು ಇಂಡೋನೇಶ್ಯಾ ಮತ್ತು ಮಲೇಶ್ಯಾಗೆ ತೆರಳಿ ಅಲ್ಲಿನ ಜನರನ್ನು ಮತಾಂತರಗೊಳಿಸಿತು?

8. ಆಫ್ರಿಕಾದ ಪೂರ್ವ ಕರಾವಳಿ:

ಆಫ್ರಿಕಾದ ಪೂರ್ವ ಕರಾವಳಿಯಲ್ಲಿ ಇಸ್ಲಾಮ್ ಕ್ಷಿಪ್ರವಾಗಿ ಹಬ್ಬಿತ್ತು. ನಾನು ಪುನಃ ಕೇಳುತ್ತೇನೆ: ಇಸ್ಲಾಮ್ ಖಡ್ಗದಿಂದ ಹಬ್ಬಿದ್ದಾಗಿದ್ದರೆ ಆಫ್ರಿಕಾದ ಪೂರ್ವ ಕರಾವಳಿಗೆ ಹೋದ ಮುಸ್ಲಿಮ್ ಸೈನ್ಯ ಯಾವುದು?

9. ಥಾಮಸ್ ಕಾರ್ಲೈಲ್:

ಪ್ರಸಿದ್ಧ ಇತಿಹಾಸ ತಜ್ಞ ಥಾಮಸ್ ಕಾರ್ಲೈಲ್ ತನ್ನ Heroes and Hero worship ಎಂಬ ಗ್ರಂಥದಲ್ಲಿ ಇಸ್ಲಾಮ್ ಖಡ್ಗದ ಮೂಲಕ ಹಬ್ಬಿದೆ ಎಂಬ ತಪ್ಪು ತಿಳುವಳಿಕೆಯ ಬಗ್ಗೆ ಹೇಳುತ್ತಾರೆ:

The sword indeed, but where will you get your sword? Every new opinion, at its starting is precisely in a minority of one. In one man's head alone. There

it dwells as yet. One man alone of the whole world believes it, there is one man against all men. Then he takes a sword and try to propagate with that, will do little for him. You must get your sword! On the whole, a thing will propagate itself as it can.

“ಖಡ್ಗ ನಿಜ, ಆದರೆ ನಿನ್ನ ಖಡ್ಗವನ್ನು ನೀನು ಎಲ್ಲಿಂದ ಪಡೆಯುವೆ? ಎಲ್ಲಾ ಹೊಸ ಅಭಿಪ್ರಾಯಗಳು ಅದರ ಆರಂಭ ದೆಸೆಯಲ್ಲಿ ಖಂಡಿತವಾಗಿಯೂ ಒಬ್ಬನಲ್ಲಿ ಮಾತ್ರವಿರುತ್ತದೆ. ಒಬ್ಬ ವ್ಯಕ್ತಿಯ ತಲೆಯಲ್ಲಿ ಮಾತ್ರ. ಅದು ಅಲ್ಲಿ ನೆಲೆಯೂರಿರುತ್ತದೆ. ಜಗತ್ತಿನಾದ್ಯಂತ ಕೇವಲ ಅವನು ಮಾತ್ರ ಅದನ್ನು ನಂಬುತ್ತಾನೆ. ಎಲ್ಲಾ ಜನರಿಗೆ ವಿರುದ್ಧವಾಗಿ ಅವನೊಬ್ಬನು ಮಾತ್ರ. ನಂತರ ಅವನು ಖಡ್ಗವನ್ನೆತ್ತಿ ಖಡ್ಗದ ಬಲದಿಂದ ಅದನ್ನು ಬೋಧಿಸಲು

ಪ್ರಯತ್ನಿಸುತ್ತಾನೆ. ಇದರಿಂದ ಅವನಿಗೆ ಸಿಗುವ ಪ್ರಯೋ-ಜನ ಸ್ವಲ್ಪ ಮಾತ್ರ. ನೀನು ನಿನ್ನ ಖಡ್ಗವನ್ನು ಪಡೆದುಕೊಳ್ಳ-ಬೇಕು! ಅದಕ್ಕೆ ಸಾಧ್ಯವಾಗುವಂತೆ ತನ್ನಿಂತಾನೇ ಅಖಂ-ಡವಾಗಿ ಬೋಧಿಸುವಂತಹ ಒಂದು ವಸ್ತುವಾಗಿರಬೇಕು ಆ ಖಡ್ಗ."

10. ಧರ್ಮದಲ್ಲಿ ಬಲಾತ್ಕಾರವಿಲ್ಲ:

ಇಸ್ಲಾಮ್ ಹಬ್ಬಿದ್ದು ಯಾವ ಖಡ್ಗದಿಂದ? ಒಂದು ವೇಳೆ ಅಂತಹ ಖಡ್ಗ ಮುಸ್ಲಿಮರ ಬಳಿಯಿದ್ದರೂ ಅದನ್ನು ಬಳಸಲು ಮುಸ್ಲಿಮರಿಗೆ ಅವಕಾಶವಿಲ್ಲ. ಏಕೆಂದರೆ ಕುರ್‌ಆನ್ ಹೇಳುತ್ತದೆ:

"ಧರ್ಮದಲ್ಲಿ ಯಾವುದೇ ಬಲಾತ್ಕಾರವಿಲ್ಲ. ಸತ್ಯವು ಅಸ-ತ್ಯದಿಂದ ಬೇರ್ಪಟ್ಟು ನಿಂತಿದೆ." (ಕುರ್‌ಆನ್ 2/256)

11. ಬುದ್ಧಿಶಕ್ತಿಯ ಖಡ್ಗ:

ಅದು ಬುದ್ಧಿಶಕ್ತಿಯ ಖಡ್ಗವಾಗಿದೆ. ಜನರ ಹೃದಯಗ-ಳನ್ನು ಮತ್ತು ಮನಗಳನ್ನು ಜಯಿಸಿದ ಖಡ್ಗ. ಕುರ್‌ಆನ್ ಹೇಳುತ್ತದೆ:

"ಯುಕ್ತಿ ಮತ್ತು ಸುಂದರವಾದ ಬೋಧನೆಯ ಮೂಲಕ ನೀನು ನಿನ್ನ ಸೃಷ್ಟಿಕರ್ತನ ಮಾರ್ಗದ ಕಡೆಗೆ (ಜನರನ್ನು) ಆಮಂತ್ರಿಸು. ಅತ್ಯುತ್ತಮವಾದ ರೀತಿಯಲ್ಲಿ ಅವರೊಂ-ದಿಗೆ ತರ್ಕಿಸು." (ಕುರ್‌ಆನ್ 16/125)

12. 1934ರಿಂದ 1984ರವರೆಗೆ ಜಾಗತಿಕ ಧರ್ಮಗಳ-ಲ್ಲಿ ವೃದ್ಧಿ:

Reader's Digest 'Almanac' ನಲ್ಲಿದ್ದ ಲೇಖನ-ವೊಂದರಲ್ಲಿ 1934ರಿಂದ 1984 ರವರೆಗಿರುವ ಅರ್ಧ ಶತಮಾನದಲ್ಲಿ ಜಗತ್ತಿನ ಅತಿದೊಡ್ಡ ಧರ್ಮಗಳಲ್ಲಿರುವ ಶೇಕಡವಾರು ವೃದ್ಧಿಯ ಅಂಕಿ ಅಂಶಗಳನ್ನು ನೀಡ-

ಲಾಗಿತ್ತು. ಈ ಲೇಖನವು The Plain Truth ಎಂಬ ಪತ್ರಿಕೆಯಲ್ಲೂ ಪ್ರಕಟವಾಗಿತ್ತು. ಅದರ ಪ್ರಕಾರ 235% ವೃದ್ಧಿಯೊಂದಿಗೆ ಇಸ್ಲಾಮ್ ಮೊದಲ ಸ್ಥಾನದಲ್ಲಿತ್ತು. ಕ್ರೈಸ್ತ ಧರ್ಮವು ಕೇವಲ 47% ದಷ್ಟು ಮಾತ್ರ ವೃದ್ಧಿಯಾಗಿತ್ತು. ನಾನು ಕೇಳುತ್ತೇನೆ: ಮಿಲಿಯಾಂತರ ಜನರನ್ನು ಇಸ್ಲಾಮಿಗೆ ಪರಿವರ್ತಿಸಿದ ಯಾವ ಯುದ್ಧವು ಈ ಶತಮಾನದಲ್ಲಿ ಜರುಗಿದೆ?

13. ಇಸ್ಲಾಂ ಅಮೇರಿಕಾ ಮತ್ತು ಯೂರೋಪಿನಲ್ಲಿ ಅತಿವೇಗವಾಗಿ ಬೆಳೆಯುತ್ತಿದೆ:

ಇಂದು ಅಮೇರಿಕಾದಲ್ಲಿ ಅತಿ ವೇಗವಾಗಿ ಬೆಳೆಯುತ್ತಿರುವ ಧರ್ಮವು ಇಸ್ಲಾಮ್ ಆಗಿದೆ. ಯೂರೋಪಿನಲ್ಲಿ ಕೂಡ ಇಸ್ಲಾಮ್ ಅತಿವೇಗವಾಗಿ ಬೆಳೆಯುತ್ತಿದೆ. ಈ ರೀತಿ ದೊಡ್ಡ ಸಂಖ್ಯೆಯಲ್ಲಿ ಇಸ್ಲಾಮನ್ನು ಸ್ವೀಕರಿಸಲು ಪಾಶ್ಚಾತ್ಯರನ್ನು ಬಲವಂತಪಡಿಸುತ್ತಿರುವ ಖಡ್ಗ ಯಾವುದು?

14. Dr. Joseph Adam Pearson:

Dr. Joseph Adam Pearson ಹೇಳುತ್ತಾರೆ:

People who worry that nuclear weaponry will one day fall in the hands of the Arabs, fail to realize that the Islamic bomb has been dropped already, it fell the day MUHAMMED (pbuh) was born.

"ಪರಮಾಣು ಶಸ್ತ್ರವು ಒಂದಿನ ಅರಬ್ಬರ ಕೈಗೆ ಸಿಗಬಹುದು ಎಂದು ಮರುಗುವ ಜನರು ಇಸ್ಲಾಮಿಕ್ ಬಾಂಬ್ ಈಗಾಗಲೇ ಅವರಲ್ಲಿದೆ ಎಂಬುದನ್ನು ಅರಿತುಕೊಳ್ಳುವಲ್ಲಿ ಎಡವಿದ್ದಾರೆ. ಪ್ರವಾದಿ ಮುಹಮ್ಮದ್(ಸ)ರವರು ಜನಿಸಿದಂದೇ ಅದು ಅವರಿಗೆ ದೊರಕಿದೆ."

